# ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1946
02. ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು : ಡಾ|| ಜೈಮಾಲ ರಾಮಚಂದ್ರ
03. ಉತ್ತರಿಸುವ ದಿನಾಂಕ : 26.03.2020
04. ಉತ್ತರಿಸುವ ಸಚಿವರು. : ಮಾನ್ಯ ಗೃಹ ಸಚಿವರು.

| ಪ್ರಶ್ನೆ | ಉತ್ತರ |
|---|---|
| ಅ) ಧಮನಿತ ಮಹಿಳೆಯರ ಹಕ್ಕು ಉಲ್ಲಂಘನೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿದೆ. |
| ಆ) 2011ರ ಸುಪ್ರೀಂ ಕೋರ್ಟ್ ತೀರ್ಪಿನಂತೆ ಧಮನಿತ ಮಹಿಳೆಯರನ್ನು ಬಲಿಪಶು (VICTIM) ಎಂದು ಭಾವಿಸಬೇಕೆಂದು ಮತ್ತು ಅವರನ್ನು ಬಂಧಿಸುವಂತಿಲ್ಲ ಹಾಗೂ ಪೊಲೀಸ್ ಠಾಣೆಯಲ್ಲಿ ಹೊಡೆಯುವಂತಿಲ್ಲ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿದೆ. |
| ಇ) ಬಂದಿದ್ದಲ್ಲಿ ಸರ್ಕಾರದ ಕ್ರಮಗಳೇನು ? | ಧಮನಿತ ಮಹಿಳೆಯರ ಹಕ್ಕುಗಳನ್ನು ಕಾಯುವ ನಿಟ್ಟಿನಲ್ಲಿ ಪೊಲೀಸ್ ಇಲಾಖೆಯು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>Immoral Traffic (Prevention) Act, 1956 ಕಾಯ್ದೆ ಅಡಿಯಲ್ಲಿ ದಾಖಲಾಗುವ ಪ್ರಕರಣಗಳಲ್ಲಿ ಲೈಂಗಿಕ ಕಾರ್ಯಕರ್ತೆಯರು ನೊಂದವರು/ಬಲಿಪಶು ಆಗಿರುವುದರಿಂದ ಅವರನ್ನು ಆರೋಪಿಗಳೆಂದು ಪರಿಗಣಿಸದೆ, ಇವರುಗಳ ದಲ್ಲಾಳಿಗಳು, ಪಿಂಪ್‌ಗಳನ್ನು, ಅಕ್ರಮ ಮಾನವ ಕಳ್ಳಸಾಗಾಣಿದಾರರು ಮತ್ತು ಬ್ರಾಥಲ್ ನಡೆಸುವವರನ್ನು ಆರೋಪಿಗಳನ್ನಾಗಿ ಪರಿಗಣಿಸಲು ರಾಜ್ಯದ ಎಲ್ಲಾ ಪೊಲೀಸ್ ಅಧೀಕ್ಷಕರುಗಳು/ ಪೊಲೀಸ್ ಆಯುಕ್ತರುಗಳಿಗೆ ಅಗತ್ಯ ಸೂಚನೆಗಳನ್ನು ಸುತ್ತೋಲೆ ದಿನಾಂಕ 30/9/2004 ಮತ್ತು 22/11/2005ರಲ್ಲಿ ನೀಡಲಾಗಿರುತ್ತದೆ.<br>ಮುಂದುವರೆದಂತೆ ಧಮನಿತ ಮಹಿಳೆಯರ ಶ್ರೇಯೋಭಿವೃದ್ಧಿಗಾಗಿ ಹಾಗೂ ಅವರ ಸ್ಥಿತಿಗತಿಗಳ ಕುರಿತು ಅಧ್ಯಯನ ನಡೆಸಲು ಸರ್ಕಾರವು ಸಮಿತಿಯನ್ನು ರಚಿಸಲಾಗಿರುತ್ತದೆ.<br>ಸದರಿ ಸಮಿತಿಯು ಧಮನಿತ ಮಹಿಳೆಯ (ಲೈಂಗಿಕ ಕಾರ್ಯಕರ್ತೆಯರ) ಸ್ಥಿತಿಗತಿಗಳ ಕುರಿತು ಅಧ್ಯಯನ ನಡೆಸಿ ಸೂಚಿಸಿರುವ ವರದಿಯ ಶಿಫಾರಸ್ಸುಗಳಂತೆ ಕ್ರಮ ಕೈಗೊಳ್ಳಲು ಹಾಗೂ ಈ ಶಿಫಾರಸ್ಸುಗಳನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸಲು ಎಲ್ಲಾ ಘಟಕಾಧಿಕಾರಿಗಳಿಗೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ, ಬೆಂಗಳೂರು ಇವರ ಕಛೇರಿಯ ಜ್ಞಾಪನ ದಿನಾಂಕ 11/3/2019 ರಲ್ಲಿ ಸೂಚನೆ ನೀಡಲಾಗಿದೆ. |

ಸಂಖ್ಯೆ: ಇ-ಒಇ 10 ಸದನ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು